# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಫೆಬ್ರವರಿ ೧೨, ೨೦೧೫ ( ಮಾಘ ೨೩, ಶಕ ವರ್ಷ ೧೯೩೬)<br>Bengaluru, Thursday, February 12, 2015 (Magha 23, Shaka Varsha 1936) | ಸಂಚಿಕೆ ೭<br>Issue 7 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕಂದಾಯ ಭವನ, ರಾಮನಗರ ಜಿಲ್ಲೆ. ರಾಮನಗರ**

**ಅಧಿಸೂಚನೆ**

**ಸಂಖ್ಯೆ:ರಾಜಿಕ/ಸಿಬ್ಬಂದಿ/ಸಿಆರ್/59/14-15 ದಿನಾಂಕ: 08-01-2015**

ವಿಷಯ : ರಾಮನಗರ ಜಿಲ್ಲೆಯಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ (ಮೆರಿಟ್ ಆಧಾರದ ಮೇರೆ) ಆಯ್ಕೆ ಮಾಡುವ ಕುರಿತು

ಉಲ್ಲೇಖ : ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್.ಡಿ 299 ಬಿ.ಎಸ್.ಸಿ 2006, ದಿನಾಂಕ:03-02-2009

ಪ್ರಕಟಿಸಲಾಗಿರುವಂತೆ ರಾಮನಗರ ಜಿಲ್ಲೆಯ ತಾಲ್ಲೂಕು ಕಛೇರಿಗಳ ಭೂಮಿ ಕೇಂದ್ರಗಳಲ್ಲಿ, ಆಯಾ ತಾಲ್ಲೂಕಿನ ವೃತ್ತಗಳಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ರೆವಿನ್ಯೂ ಸಬಾರ್ಡಿನೆಟ್ ಬ್ರಾಂಚ್) (ಕೇಡರ್ ಅಂಡ್ ರೆಕ್ರೂಟ್‌ಮೆಂಟ್) ನಿಯಮಗಳು 1977 ರಂತೆ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ನಿಗದಿಪಡಿಸಿದ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1. **ಹುದ್ದೆಗಳ ಸಂಖ್ಯೆ:50**
2. **ಹುದ್ದೆಗಳ ವರ್ಗೀಕರಣ (ರೋಸ್ಟರ್ ಕ್ರಮ ಸಂಖ್ಯೆ 63 ರಿಂದ 112 ರ ವರೆಗೆ)**

| ಕ್ರ. ಸಂ. | ವರ್ಗೀಕರಣದ ವಿವರ | ಶೇಕಡ | ಸಾಮಾನ್ಯ ಅಭ್ಯರ್ಥಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ | ಮಾಜಿ ಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|---|
| 1 | ಸಾಮಾನ್ಯ | 50% | 4 | 8 | 7 | 1 | 2 | 2 | 1 | 25 |
| 2 | ಪ.ಜಾತಿ | 15% | 1 | 2 | 2 | 0 | 0 | 1 | 1 | 07 |
| 3 | ಪ.ಪಂಗಡ | 3% | 0 | 01 | 1 | 0 | 0 | 0 | 0 | 02 |
| 4 | ಪ್ರವರ್ಗ- I | 4% | 0 | 01 | 0 | 1 | 0 | 0 | 0 | 02 |
| 5 | ಪ್ರವರ್ಗ- IIಎ | 15% | 1 | 2 | 02 | 0 | 1 | 1 | 0 | 07 |
| 6 | ಪ್ರವರ್ಗ- IIಬಿ | 4% | 0 | 01 | 0 | 1 | 0 | 0 | 0 | 02 |
| 7 | ಪ್ರವರ್ಗ- IIIಎ | 4% | 0 | 0 | 1 | 1 | 0 | 0 | 0 | 02 |
| 8 | ಪ್ರವರ್ಗ-IIIಬಿ | 5% | 0 | 1 | 1 | 1 | 0 | 0 | 0 | 03 |
| **ಒಟ್ಟು** | | **100%** | **06** | **16** | **14** | **05** | **03** | **04** | **02** | **50** |

3. **ವೇತನ ಶ್ರೇಣಿ:** ರೂ.11600–200–12000–250–13000–300–14200–350–15600–400–17200–450–19000–500–21000

4. **ಶೈಕ್ಷಣಿಕ ವಿದ್ಯಾರ್ಹತೆ:** ದ್ವಿತೀಯ ಪಿ.ಯು.ಸಿ ಪರೀಕ್ಷೆಯಲ್ಲಿ ಅಥವಾ ಸೆಂಟ್ರಲ್ ಬೋರ್ಡ್ ಆಫ್ ಸೆಕೆಂಡರಿ ಎಜುಕೇಷನ್ (CBSE) ಅಥವಾ ಐ.ಸಿ.ಎಸ್.ಇ. (ICSE) ರವರು ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

5. **ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸುವ ದಿನಾಂಕ:**

| ವಿವರ | ದಿನಾಂಕ | ವೆಬ್ ಸೈಟ್ ವಿಳಾಸ |
|---|---|---|
| **ಅರ್ಜಿ ಸಲ್ಲಿಸಲು ನಿಗಧಿ ಪಡಿಸಿದ ದಿನಾಂಕ** | **16–01–2015** | **http://ramanagara-va.kar.nic.in** |
| **ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ** | **15–02–2015** | |

6. **ಅರ್ಜಿ ಸಲ್ಲಿಸುವ ವಿಧಾನ:–** ಅರ್ಜಿಗಳನ್ನು ಆನ್–ಲೈನ್ (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದಾಗಿದೆ. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.

7. **ಅರ್ಜಿ ಶುಲ್ಕ:–**

| | | |
|---|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ | ರೂ.250/– | **ರೂ 30/– ಬ್ಯಾಂಕ್ ಶುಲ್ಕ ಹೊರತುಪಡಿಸಿ** |
| ಸಾಮಾನ್ಯ ವರ್ಗ 1, 2ಎ, 2ಬಿ, 3ಎ, 3ಬಿ ವರ್ಗಕ್ಕೆ | ರೂ.500/– | |

8. **ಆನ್–ಲೈನ್ ಮುಖಾಂತರ ಅರ್ಜಿ ಸಲ್ಲಿಸುವ ವಿಧಾನ:–** ಅಭ್ಯರ್ಥಿಯು ಇಲಾಖೆಯ ಅಧಿಕೃತ ವೆಬ್ ಸೈಟ್ http://ramanagara-va.kar.nic.in ತೆರೆದು ಕಂಪ್ಯೂಟರ್ ಪರದೆಯ Application Form ನ್ನು ಕ್ಲಿಕ್ ಮಾಡಿ ನಂತರ ಅರ್ಜಿಯನ್ನು ತುಂಬಬೇಕು. ತುಂಬಿದ ನಂತರ ಅಭ್ಯರ್ಥಿಯು Submit Button ಅನ್ನು ಒತ್ತಿದರೆ ಅರ್ಜಿ ಸಂಖ್ಯೆ (Reference Number) ಸೃಷ್ಟಿಯಾಗುತ್ತದೆ. ಆನ್–ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ (Acknowledgement slip) ಮತ್ತು ಚಲನ್‌ನ್ನು ತೆಗೆದುಕೊಳ್ಳತಕ್ಕದ್ದು. ಈ ಚಲನ್‌ನ್ನು ಅರ್ಜಿ ಶುಲ್ಕದೊಂದಿಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು (SBM) ಬ್ಯಾಂಕ್‌ನ ಯಾವುದಾದರೂ ಶಾಖೆಯಲ್ಲಿ ಉಳಿತಾಯ ಖಾತೆ (ಎಸ್.ಬಿ) **ಅಕೌಂಟ್ ನಂ : 64052680679**ಗೆ ಪಾವತಿಸಬೇಕು. ಅಭ್ಯರ್ಥಿಗಳು ಸ್ವೀಕೃತಿ ಸ್ಲಿಪ್‌ನ್ನು ಮತ್ತು ಚಲನ್ ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಇನ್ನೊಂದು ಚಲನ್ ಪ್ರತಿ ಬ್ಯಾಂಕ್‌ನಲ್ಲಿ ಇರುತ್ತದೆ. ಈ ದಾಖಲೆಗಳನ್ನು ಪರಿಶೀಲನೆಗೆ ನಿಗಧಿಪಡಿಸಿದ ದಿನಾಂಕದಂದು ಹಾಜರುಪಡಿಸತಕ್ಕದ್ದು. ಬ್ಯಾಂಕಿನಲ್ಲಿ ನಿಗಧಿತ ಅರ್ಜಿ ಶುಲ್ಕ ಪಾವತಿಸಲು ಕೊನೆಯ ದಿನಾಂಕ: **15-02-2015** ಆಗಿರುತ್ತದೆ. ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಒಮ್ಮೆ ಅರ್ಜಿ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರೆ ಯಾವುದೇ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದ ವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

- ಅರ್ಜಿಗಳನ್ನು ದಿನಾಂಕ: 15–02–2015 ರೊಳಗಾಗಿ ಸಲ್ಲಿಸತಕ್ಕದ್ದು.
- ಅರ್ಜಿ ಶುಲ್ಕವನ್ನು ದಿನಾಂಕ: 15–02–2015 ರೊಳಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು ಹಾಗೂ ಚಲನ್‌ಸ್ಕಾನ್ (scan)ಮಾಡಿ Uploading Challan Option ದಲ್ಲಿ Upload ಮಾಡತಕ್ಕದ್ದು.
- ಅಭ್ಯರ್ಥಿಗಳು ಆನ್–ಲೈನ್ ನಲ್ಲಿ ನಿಗಧಿತ ಶುಲ್ಕ ಪಾವತಿಯ ಕುರಿತು ವಸ್ತು ಸ್ಥಿತಿ (Status) ಅನ್ನು ಶುಲ್ಕ ಪಾವತಿಸಿದ 05 ದಿವಸಗಳ ನಂತರ ಪರಿಶೀಲಿಸಿಕೊಳ್ಳಬಹುದು. ಪಾವತಿಯಾಗಿರುವುದರ ಬಗ್ಗೆ ಖಚಿತವಾಗದಿದ್ದಲ್ಲಿ ಚಲನ್ ಪ್ರತಿಯನ್ನು ಕಳುಹಿಸತಕ್ಕದ್ದು.

9. **ಅರ್ಹತಾ ಷರತ್ತುಗಳು:–**

- ಅರ್ಜಿದಾರರು ಭಾರತೀಯ ನಾಗರೀಕರಾಗಿರತಕ್ಕದ್ದು.
- ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕಗಳನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ/ ಮಾನಸಿಕ ನ್ಯೂನ್ಯತೆಯಿಂದ ಮುಕ್ತವಾಗಿರತಕ್ಕದ್ದು.
- ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅರ್ಜಿಯನ್ನು ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ನೇಮಕಾತಿ ಸಮಿತಿಯು ಕಾಯ್ದಿರಿಸಿಕೊಳ್ಳಲಾಗಿದೆ.
- ನಿಗಧಿತ ಶೈಕ್ಷಣಿಕ ಅರ್ಹತೆ ಜೊತೆಗೆ ಮೇಲ್ಕಂಡ ಅರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿಯನ್ನು ಸಲ್ಲಿಸಲು ಅರ್ಹರಾಗಿರುತ್ತಾರೆ.

10. **ವಯೋಮಿತಿ:–**

ಈ ಪ್ರಕಟಣೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ಕನಿಷ್ಠ 18 ವರ್ಷ ಪೂರೈಸಿರತಕ್ಕದ್ದು ಮತ್ತು ಈ ಕೆಳಗಿನ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

| ವರ್ಗ | ಕನಿಷ್ಠ | ಗರಿಷ್ಠ |
|---|---|---|
| ಸಾಮಾನ್ಯ ವರ್ಗ | 18 ವರ್ಷ | 35 ವರ್ಷ |
| ಪ್ರವರ್ಗ 2ಎ, 2ಬಿ, 3ಎ, 3ಬಿ | 18 ವರ್ಷ | 38 ವರ್ಷ |
| ಪ.ಜಾತಿ/ಪ.ಪಂಗಡ/ಪ್ರವರ್ಗ–I | 18 ವರ್ಷ | 40 ವರ್ಷ |

ಎಸ್.ಎಸ್.ಎಲ್.ಸಿ ಅಥವಾ ವರ್ಗಾವಣೆ ಪ್ರಮಾಣ ಪತ್ರ (ಟಿ.ಸಿ) ಅಥವಾ ಕ್ಯುಮುಲೇಟಿವ್ ರೆಕಾರ್ಡ್‌ನಲ್ಲಿ ನಮೂದಿಸಿರುವ ಜನ್ಮ ದಿನಾಂಕವನ್ನು ಆಯ್ಕೆ ಪ್ರಾಧಿಕಾರವು ಪರಿಗಣಿಸುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ. ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮಾವಳಿಗಳ ನಿಯಮ 6ರಂತೆ ವಯೋಮಿತಿಯನ್ನು ಅದರಲ್ಲಿ ತಿಳಿಸಿರುವ ಮಟ್ಟಿಗೆ ಸಂಬಂಧಪಟ್ಟ ದಾಖಲೆ ಒದಗಿಸಿದ್ದಲ್ಲಿ ಹೆಚ್ಚಿಸುವ ಬಗ್ಗೆ ಪರಿಶೀಲಿಸಲಾಗುವುದು.

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 6 ರಂತೆ ಗರಿಷ್ಠ ವಯೋಮಿತಿಯನ್ನು ಈ ಮುಂದಿನ ಪ್ರಕರಣಗಳಲ್ಲಿ ಮುಂದೆ ಹೇಳಿರುವಷ್ಟರಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.

ಎ)ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪಿಸಲಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಅಡಿಯಲ್ಲಿನ ಸರ್ಕಾರದಿಂದ ಸ್ಥಾಪಿತವಾಗಿದ್ದು ಮತ್ತು ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ನಿಗಮದ ಅಡಿಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂತ ಹುದ್ದೆಗಳನ್ನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ಅಥವಾ ಹತ್ತು ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಬಿ) ಮಾಜಿ ಸೈನಿಕನಾಗಿರುವ ಅಭ್ಯರ್ಥಿಯ ಸಂದರ್ಭದಲ್ಲಿ ಮೂರು ವರ್ಷಗಳು ಮತ್ತು ಇದಕ್ಕೆ ಕೇಂದ್ರದ ಸಶಸ್ತ್ರ ಪಡೆಗಳಲ್ಲಿ ಅವನು ಸೇವೆ ಸಲ್ಲಿಸಿರುವಷ್ಟು ವರ್ಷಗಳನ್ನು ಸೇರಿಸಬೇಕು.

ಸಿ) ಪೂರ್ಣಾವಧಿ ಕೆಡೆಟ್ ಸೇವೆ ಸಲ್ಲಿಸಿದ ತರುವಾಯ ರಾಷ್ಟ್ರೀಯ ಕೆಡೆಟ್ ದಳದಿಂದ ಬಿಡುಗಡೆ ಮಾಡಿದ ಅಭ್ಯರ್ಥಿಯ ಸಂದರ್ಭದಲ್ಲಿ ಹಾಗೆ ಕೆಡೆಟ್ ಇನ್‌ಸ್ಟ್ರಕ್ಟರ್ ಆಗಿ ಸೇವೆ ಸಲ್ಲಿಸಿರುವಷ್ಟು ವರ್ಷಗಳು.

ಡಿ) ರಾಜ್ಯ ಸರ್ಕಾರ ಪ್ರಾಯೋಚಿತ ಗ್ರಾಮೀಣ ಕೈಗಾರೀಕರಣ ಯೋಜನೆಯಲ್ಲಿ ನೇಮಕಗೊಂಡ ಗ್ರಾಮ ಸಮೂಹ ಇನ್‌ಸ್ಟ್ರಕ್ಟರಾಗಿ ಆತ ಸೇವೆ ಸಲ್ಲಿಸಿರುವಷ್ಟು ವರ್ಷಗಳು.

ಇ) ಅಂಗವಿಕಲ ಅಭ್ಯರ್ಥಿಯಾಗಿದ್ದಲ್ಲಿ ಹತ್ತು ವರ್ಷಗಳು.

ಎಫ್) ಈ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಹುದ್ದೆಯನ್ನು ಧಾರಣೆ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂಥ ಹುದ್ದೆಯನ್ನು ಆತನು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಜಿ) ಅಭ್ಯರ್ಥಿ ವಿಧವೆಯಾಗಿರುವಾಗ ಹತ್ತು ವರ್ಷಗಳು.

ಹೆಚ್) ಜೀತ ಕಾರ್ಮಿಕನಾಗಿದ್ದ ಸಂದರ್ಭದಲ್ಲಿ ಹತ್ತು ವರ್ಷಗಳು.

**11. ಜಾತಿ ಮತ್ತು ಮೀಸಲಾತಿ ಪ್ರಮಾಣ ಪತ್ರಗಳು:**

1) ಜಾತಿ ಮೀಸಲಾತಿ ಕೋರಬಯಸುವ.
   1. ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ **"ಡಿ"** ರಲ್ಲಿ (ಅನುಬಂಧ–1)
   2. ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ "ಇ" ನಲ್ಲಿ (ಅನುಬಂಧ–2)
2) 2ಎ, 2ಬಿ, 3ಎ, 3ಬಿ, ಅಭ್ಯರ್ಥಿಗಳು ನಮೂನೆ ಎಫ್‌ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. (ಅನುಬಂಧ–3)

   ಈ ಪ್ರಮಾಣ ಪತ್ರಗಳು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಚಾಲ್ತಿಯಲ್ಲಿರುವಂತೆ ಪಡೆದಿರಬೇಕು.
3) ಜಾತಿ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿ (ಅಧ್ಯಕ್ಷರು, ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

1) **ಗ್ರಾಮೀಣ ಅಭ್ಯರ್ಥಿ:** ಗ್ರಾಮೀಣ ಅಭ್ಯರ್ಥಿಯ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10 ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು.
2) ಗ್ರಾಮೀಣ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ, ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

3) ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1 ರಲ್ಲಿ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ತಹಶೀಲ್ದಾರರಿಂದ ಪಡೆದಿಟ್ಟುಕೊಂಡಿರತಕ್ಕದ್ದು. (ನಮೂನೆ–1 ಮತ್ತು 2). (ಅನುಬಂಧ–4)

**ಸೂಚನೆ:**

ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ–2 ರಲ್ಲಿಯ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದು ಸಂಬಂಧಪಟ್ಟ ಕೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು.

12. **ಕನ್ನಡ ಮಾಧ್ಯಮ ಅಭ್ಯರ್ಥಿ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10 ತರಗತಿಯ ವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು. (ಅನುಬಂಧ–5)

13. **ಯೋಜನಾ ನಿರಾಶ್ರಿತ ಅಭ್ಯರ್ಥಿ:**

ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದುಕೊಂಡಿರತಕ್ಕದ್ದು. (ಅನುಬಂಧ–6)

14. **ಅಂಗವಿಕಲ ಮೀಸಲಾತಿ ಅಭ್ಯರ್ಥಿ:**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 9(1–ಎ) ರನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ ಸಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇಕಡಾ 5ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 128 ಸೆನೆನಿ 2006 ದಿನಾಂಕ 1–8–2009 ರಂತೆ ಮೀಸಲಾತಿ ನೀಡಲಾಗುವುದು. ಸರಕಾರದ ಅಧಿಸೂಚನೆ ಸಂಖ್ಯೆ : ಡಿ.ಎಫ್.ಎ.ಆರ್.52. ಎಸ್.ಎಸ್.ಆರ್.99. ದಿನಾಂಕ: 29–11–2002 ರೀತ್ಯಾ ಗ್ರಾಮಲೆಕ್ಕಿಗರ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ಅಭ್ಯರ್ಥಿಗಳಿಗೆ ಮಾತ್ರ ಕಲ್ಪಿಸಲಾಗಿದೆ.

1. ಕುಷ್ಠ ರೋಗದಿಂದ ಗುಣಮುಖರಾದವರು (Leprosy cured)
2. ಶ್ರವಣ ದೋಷವುಳ್ಳವರು (Hearing impaired)
3. ಮಾನಸಿಕ ಅಸ್ವಸ್ಥತೆ (Mentally ill)

ಈ ಮೇಲಿನ ಅಂಗವಿಕಲರು ಹೊರತುಪಡಿಸಿ ಇತರ ದೈಹಿಕ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಗ್ರಾಮಲೆಕ್ಕಿಗರ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 128 ಸೆನೆನಿ 2005, ದಿನಾಂಕ:19–11–2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದುಕೊಂಡಿರತಕ್ಕದ್ದು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಲಗತ್ತಿಸಿದೆ. (ಅನುಬಂಧ–8)

**ಸೂಚನೆ:** ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಅರ್ಹತೆಯನ್ನು ಪಡೆದಿರಬೇಕು. ಪ್ರಮಾಣ ಪತ್ರಗಳ ನಮೂನೆಗಳನ್ನು ಅನುಬಂಧ 1 ರಿಂದ 8 ರ ವರೆಗೆ ನೋಡಬಹುದು.

15. **ಆಯ್ಕೆ ವಿಧಾನ:**

ಕರ್ನಾಟಕ ಜನರಲ್ ಸರ್ವೀಸಸ್ (Revenue Subordinate Branch) (Cadre and Recruitment) (ತಿದ್ದುಪಡಿ) ನಿಯಮಗಳು 2008 ಮತ್ತು 2009 ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಅಭ್ಯರ್ಥಿಯನ್ನು ಅವರು ಪಿ.ಯು.ಸಿ. ಪರೀಕ್ಷೆ ಅಥವಾ CBSE ಅಥವಾ ICSE ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಅಂಕಗಳು (On merit) ಆಧಾರದ ಮೇಲೆ ಆಯಾಯ ಮೀಸಲಾತಿ ಪ್ರವರ್ಗಕ್ಕೆ ಸಂಬಂಧಿಸಿದಂತೆ ಆಯ್ಕೆ ಮಾಡಲಾಗುವುದು.

16. **ಪ್ರಮುಖ ಸೂಚನೆಗಳು:**

ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಾಗ ಈ ಕೆಳಕಾಣಿಸಿದ ಪ್ರಮಾಣ ಪತ್ರಗಳನ್ನು ಸಂದರ್ಭಾನುಸಾರ ಹೊಂದಿರಬೇಕಾಗುತ್ತದೆ.

1. ಪಿ.ಯು.ಸಿ. ಪರೀಕ್ಷೆ ಅಥವಾ CBSE ಅಥವಾ ICSE ನಡೆಸುವ 12ನೇ ತರಗತಿ ಪರೀಕ್ಷೆಯ ಪ್ರಮಾಣ ಪತ್ರ.
2. ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ ಅಥವಾ ಕ್ಯುಮುಲೇಟಿವ್ ದಾಖಲೆ)

3. ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರುಕ್ಷೇಪಣಾ ಪ್ರಮಾಣ ಪತ್ರವನ್ನು (No objection Certificate) ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರಬೇಕು.
4. ಪರಿಶಿಷ್ಟ ಜಾತಿ–ಪರಿಶಿಷ್ಟ ಪಂಗಡ (ಅನುಬಂಧ–1, ನಮೂನೆ–ಡಿ) ಮತ್ತು ಪ್ರವರ್ಗ–1 (ಅನುಬಂಧ–2, ನಮೂನೆ–ಇ) ಹಾಗೂ 2ಎ, 2ಬಿ, 3ಎ, 3ಬಿ (ಅನುಬಂಧ–3, ನಮೂನೆ–ಎಫ್) ಮೀಸಲಾತಿ ಅಭ್ಯರ್ಥಿಗಳು ಕ್ರಮವಾಗಿ ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್ ರವರಿಂದ ಪಡೆದ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು.
5. ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಜೀತ ಕಾರ್ಮಿಕರು, ಗ್ರಾಮ ಸಮೂಹ ಪರಿಶೀಲಕರು ಮತ್ತು ಕ್ಯಾಡೆಟ್ ಪರಿವೀಕ್ಷಕರು ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.
6. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ.
7. ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ.
8. ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ.
9. ಒಬ್ಬ ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚು ಅರ್ಜಿ ಸಲ್ಲಿಸಿದ್ದಲ್ಲಿ ಅಂತಹ ಅರ್ಜಿಯನ್ನು ವಜಾಕರಿಸಲಾಗುವುದು.

**17. ಸಾಮಾನ್ಯ ಸೂಚನೆಗಳು:**

1. ನೈತಿಕ ದುರ್ನಡತೆಯಿಂದಾಗಿ/ನೀತಿ ಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ಕೇಂದ್ರ/ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿ ಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿ ಬದಲಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ/ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ/ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗಿರುತ್ತಾರೆ.
2. ಅರ್ಜಿಯಲ್ಲಿ ತಪ್ಪು/ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ ಹಾಗೂ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗುವುದು.
3. ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ.
4. ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಆನ್ ಲೈನ್ ಮುಖಾಂತರ ವೆಬ್ ಸೈಟ್‌ನಲ್ಲಿ ಲಭ್ಯವಿರುವ ಸೂಚನೆಗಳನ್ನು ಪಾಲಿಸಬೇಕು.
5. ಅಭ್ಯರ್ಥಿಗಳ ಅರ್ಹತೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.
6. ಸರಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ನೇಮಕಾತಿ ಪ್ರಾಧಿಕಾರಿ / ಇಲಾಖಾ ಮುಖ್ಯಸ್ಥರಿಂದ ನಿರಾಕ್ಷೇಪಣಾ ಪತ್ರ ಪಡೆದಿರತಕ್ಕದ್ದು. (ಅನುಬಂಧ–9)
7. ಆಯ್ಕೆ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದ ಇರುವುದಿಲ್ಲ.
8. ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು ಜಾತಿ ಮತ್ತು ಆದಾಯ ಪರಿಶೀಲನ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
9. ಆಯ್ಕೆಯು ಸರಕಾರದಿಂದ ಕಾಲ ಕಾಲಕ್ಕೆ ಹೊರಡಿಸುವ ನಿಯಮಗಳಿಗೆ ಒಳಪಟ್ಟಿರುತ್ತದೆ.
10. ಅರ್ಜಿ ತುಂಬುವ ವಿಧಾನ ಹಾಗೂ ಹೆಚ್ಚಿನ ವಿವರಗಳು ರಾಮನಗರ ಜಿಲ್ಲಾಧಿಕಾರಿ ಕಛೇರಿಯ ವೆಬ್‌ಸೈಟ್ ರಲ್ಲಿನ ಮಾಹಿತಿ ಸೂಚಿಯಲ್ಲಿ ಲಭ್ಯವಿರುತ್ತದೆ ಮತ್ತು ಸ್ಪಷ್ಟೀಕರಣ ಅಗತ್ಯವಾದಲ್ಲಿ ಸಹಾಯವಾಣಿ ಸಂಖ್ಯೆ: 080–27276614ಕ್ಕೆ ಹಾಗೂ ತಾಂತ್ರಿಕ ತೊಂದರೆಗಳಿಗೆ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

**ಎಫ್.ಆರ್.ಜಮಾದಾರ್, I.A.S**
ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು
ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರ
ರಾಮನಗರ ಜಿಲ್ಲೆ, ರಾಮನಗರ

PR-27
SC-200

**ಕೋಲಾರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ.**

**ಅಧಿಸೂಚನೆ ಸಂಖ್ಯೆ : ಎಡಿಎಂ 01/2015 ದಿನಾಂಕಃ 05–01–2015.**

**ವಿಷಯ :** ಶೀಘ್ರಲಿಪಿಗಾರರು ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖಃ** 1. ಸರ್ಕಾರಿ ಅಧಿಸೂಚನೆ ಸಂಖ್ಯೆಃ ಎಲ್‌ಎಡಬ್ಲ್ಯೂ 193/ ಎಲ್‌ಎಸಿ–2012, ದಿನಾಂಕಃ 27–08–2012, ಲಾ 113 ಃ ಎಲ್‌ಸಿಇ 2012, ದಿನಾಂಕ 11.12.2012 ಹಾಗೂ ಲಾ 112 ಃ ಎಲ್‌ಸಿಇ 2012 ದಿನಾಂಕ 28.12.2012 .

2. ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ ಎಲ್‌ಸಿಎ II 128/2012 ದಿನಾಂಕಃ 14.09.2012, ಎಲ್‌ಸಿಎ II 08/2011 ದಿನಾಂಕ 17.01.2013, ಎಲ್‌ಸಿಎ II 128/2012 ದಿನಾಂಕ 21.01.2013 ಮತ್ತು ದಿನಾಂಕ 24.09.2013.

ಕೋಲಾರ ಜಿಲ್ಲೆ, ನ್ಯಾಯಾಂಗ ಇಲಾಖೆಯಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯ ಜೊತೆಗೆ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ 09–03–2015 ಅಪರಾಹ್ನ 5–00 ಗಂಟೆಯವರೆಗೆ.**

1. **ಶೀಘ್ರಲಿಪಿಗಾರರು : ಖಾಲಿ ಇರುವ ಹುದ್ದೆಗಳು - 05.**

ವೇತನ ಶ್ರೇಣಿ: 14550–350–15600–400–17200–450–19000–500–21000–600–24600–700–26700.

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಇತರೆ | ಒಟ್ಟು ಹುದ್ದೆಗಳು |
|---|---|---|---|---|
| ಪ್ರವರ್ಗ–1 | 01 | – | – | 01 |
| ಪ್ರವರ್ಗ–2 (ಎ) | – | 01 | – | 01 |
| ಪ್ರವರ್ಗ-3 (ಎ) | – | – | 01 | 01 |
| ಪ್ರವರ್ಗ-3 (ಬಿ) | – | – | 01 | 01 |
| ಪರಿಶಿಷ್ಟ ಜಾತಿ | – | 01 | – | 01 |
| **ಒಟ್ಟು** | **01** | **02** | **02** | **05** |

**ಶೀಘ್ರಲಿಪಿಗಾರರಿಗೆ ವಿದ್ಯಾರ್ಹತೆ :** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಮತ್ತು ಶೀಘ್ರಲಿಪಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ :** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷ ಒಂದಕ್ಕೆ 120 ಪದಗಳ ದರದಲ್ಲಿ 5 ನಿಮಿಷಗಳ ಉಕ್ತಲೇಖನವನ್ನು ತೆಗೆದುಕೊಂಡು, ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಅನುಲಿಪಿ ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿಃ** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಟ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 5 ಅಂಕಗಳನ್ನೊಳಗೊಂಡಿರುತ್ತದೆ.

**ಕರ್ನಾಟಕ ಸರ್ಕಾರ ಆದೇಶ ಸಂಖ್ಯೆ ಡಿಪಿಎಆರ್. 59 ಎಸ್.ಸಿ.ಆರ್. 2012 ದಿನಾಂಕ 07.07.2012 ರ ಪ್ರಕಾರ ದಿನಾಂಕ 22.03.2012 ರಿಂದ ಜಾರಿಗೆ ಬಂದಿರುವಂತೆ ಗಣಕಯಂತ್ರ (ಕಂಪ್ಯೂಟರ್) ಜ್ಞಾನ ಕಡ್ಡಾಯ.**

ಮಹಿಳಾ ಅಭ್ಯರ್ಥಿಗಳು, ಕನ್ನಡ ಮಾಧ್ಯಮ ಅಭ್ಯರ್ಥಿಗಳು ಹಾಗೂ ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿಗಳಲ್ಲಿ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಸದರಿ ಹುದ್ದೆಗಳನ್ನು ಸಾಮಾನ್ಯ ಇತರೆ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಕೋಲಾರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿಃ**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ. **ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.**

ಆ. **ಗರಿಷ್ಠ ವಯೋಮಿತಿ**

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಬಿ, 3ಎ | 38 ವರ್ಷ |
| ಪ.ಜಾತಿ, ಪ. ಪಂಗಡ, ಪ್ರವರ್ಗ - 1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಲಿಕೆ :** ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಟ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.

**ಪರಿವೀಕ್ಷಣಾ ಅವಧಿ :**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ :**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ/ಕಂಪ್ಯೂಟರ್ ಮೂಲಕ ತಯಾರಿಸಿ, ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು. ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದಂತೆ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ಧೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು 'ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ– 563101', ಇವರಿಗೆ ದಿನಾಂಕ : 09–03–2015 ಅಪರಾಹ್ನ 5–00 ಗಂಟೆಯೊಳಗೆ ತಲುಪುವಂತೆ ಕಳುಹಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

**ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ ಸ್ವಯಂ ಧೃಢಿಕರಿಸಿದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.**

1. ಇತ್ತಿಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ.
2. ಜನ್ಮ ದಿನಾಂಕದ ಧೃಡೀಕರಣಕ್ಕಾಗಿ ಎಸ್‌ಎಸ್‌ಎಲ್‌ಸಿ ಅಂಕ ಪಟ್ಟಿ/ಕ್ಯುಮುಲೇಟೀವ್ ರೆಕಾರ್ಡ್/ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪ್ರವರ್ಗ–1 ರ ಅಭ್ಯರ್ಥಿಗಳು ನಮೂನೆ –ಇ ಯಲ್ಲಿ ಮತ್ತು 2–ಎ , 3–ಎ ಮತ್ತು 3–ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆ – 2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ – 2 ರ ಜೊತೆ ನಮೂನೆ – 1 ರಲ್ಲೂ ಧೃಢಿಕರಣ ಪತ್ರವನ್ನು ಸಲ್ಲಿಸುವುದು.
7. ವಿಧವೆಯರು, ಜೀತ ಕಾರ್ಮಿಕರು ವಯೋಮಿತಿ ರಿಯಾಯ್ತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣಪತ್ರವನ್ನು ಸಲ್ಲಿಸುವುದು.
8. ಅರ್ಜಿಯನ್ನು ಕಳುಹಿಸಲು ನಿಗದಿಪಡಿಸಿದ ದಿನಾಂಕದಂದು 6 ತಿಂಗಳ ಒಳಗೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣಪತ್ರವನ್ನು ಸಲ್ಲಿಸುವುದು.
9. ಸ್ವಯಂ ವಿಳಾಸವಿರುವ ರೂ 5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

**ವಿಶೇಷ ಸೂಚನೆ:**

**ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಮೀಸಲಾತಿಯನ್ನು ಕೋರಿದ್ದಲ್ಲಿ, ಪ್ರತ್ಯೇಕ ಮೀಸಲಾತಿಗಾಗಿ ಪ್ರತ್ಯೇಕ ಅರ್ಜಿಯನ್ನು ಸಲ್ಲಿಸತಕ್ಕದ್ದು. ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚಿನ ಮೀಸಲಾತಿಯನ್ನು ಕೋರಿದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸಲಾಗುವುದು.**

**ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ಧೃಡೀಕರಿಸಿರಬೇಕು.**

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಎಸ್.ರೇಣುಕಾ ಪ್ರಸಾದ್**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ.

**ಅರ್ಜಿ ನಮೂನೆ**

**ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು**

**ರವರಿಗೆ,**

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ.**

**ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ ಎಡಿಎಂ/01/2015, ದಿನಾಂಕಃ 05–01–2015 ರ ಮೇರೆಗೆ ನಾನು ಶೀಘ್ರಲಿಗಾರರ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.**

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆ/ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆ ದಿನಾಂಕದಂದು ಅಭ್ಯರ್ಥಿ ವಯಸ್ಸು) | ವರ್ಷ | ತಿಂಗಳು | ದಿನ |
| | | | | |
| 9 | ಲಿಂಗ | ಪುರುಷ | | ಮಹಿಳೆ |
| | | | | |
| 7 | ರಾಷ್ಟ್ರೀಯತೆ | | | |
| 8 | ಧರ್ಮ ಮತ್ತು ಜಾತಿ | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | | ಅವಿವಾಹಿತ |
| | | | | |
| 10 | ಕೋರುವ ಮೀಸಲಾತಿಗಳು(2ಎ, 3ಎ, 3ಬಿ, ಪರಿಶಿಷ್ಟ ಜಾತಿ ಮತ್ತು ಪ್ರವರ್ಗ–1) ಮೀಸಲಾತಿಯನ್ನು ಸ್ಪಷ್ಟವಾಗಿ ನಮೂದಿಸತಕ್ಕದ್ದು ಮತ್ತು ಪ್ರಮಾಣ ಪತ್ರದ ಸ್ವಯಂ ಧೃಡೀಕೃತ ನಕಲನ್ನು ಲಗತ್ತಿಸಬೇಕು) | | | |
| 11 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರಾ? (ಗ್ರಾಮೀಣ, ಕನ್ನಡ ಮಾಧ್ಯಮ ಅಭ್ಯರ್ಥಿ) ಮೀಸಲಾತಿಯನ್ನು ಸ್ಪಷ್ಟವಾಗಿ ನಮೂದಿಸತಕ್ಕದ್ದು ಮತ್ತು ಪ್ರಮಾಣ ಪತ್ರದ ಸ್ವಯಂ ಧೃಡೀಕೃತ ನಕಲನ್ನು ಲಗತ್ತಿಸಬೇಕು) | | | |
| 12 | ವಿದ್ಯಾರ್ಹತೆ ಃ (ಸ್ವಯಂ ದೃಢಿಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) ಅನ್ವಯಿಸುವ ವಿದ್ಯಾರ್ಹತೆ ಅಂಕಣ ಗಳನ್ನು ಮಾತ್ರ ಭರ್ತಿ ಮಾಡುವುದು | ತೇರ್ಗಡೆಯಾದ ತಿಂಗಳು ಮತ್ತು ವರ್ಷ | ಗರಿಷ್ಟ ಅಂಕಗಳು | ಗಳಿಸಿದ ಅಂಕಗಳು |
| | ಎಸ್.ಎಸ್.ಎಲ್.ಸಿ; | | | |

| | | | | |
|---|---|---|---|---|
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | |
| | ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಕಂಪ್ಯೂಟರ್ ಜ್ಞಾನದ ಪ್ರಮಾಣಪತ್ರ | | | |
| 13 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ನಕಲನ್ನು ಲಗತ್ತಿಸಬೇಕು) | ಹೌದು | | ಇಲ್ಲ |
| 14 | ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | |
| 15 | ನಿಮ್ಮ ಸ್ವವಿಳಾಸವಿರುವ ರೂ.5/- ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರ? | | | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

**ಸ್ಥಳ :**

**ದಿನಾಂಕ:** **ಅಭ್ಯರ್ಥಿಯ ಸಹಿ.**

**PR. 26**
**SC. 10**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ**

**ನೇಮಕಾತಿ ಮತ್ತು ವಿಚಾರಣೆ ವಿಭಾಗ, ಎನ್.ಆರ್.ಚೌಕ, ಬೆಂಗಳೂರು**

**ಸಂಖ್ಯೆ:ಬಿ12(3)/ಪಿಆರ್/333/06-07, ದಿನಾಂಕ: 07-08-2014.**

**ತಿದ್ದುಪಡಿ ಪ್ರಕಟಣೆ**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ದಿನಾಂಕ:13/01/2009ರ ಅಧಿಸೂಚನೆ ಸಂಖ್ಯೆ:ಬಿ12(3)/ಪಿಆರ್/333/06-07 ಬ್ಯಾಕ್‌ಲಾಗ್ ಹುದ್ದೆಯಲ್ಲಿ ಚಾಲಕರ ಹುದ್ದೆಗಳನ್ನು ತುಂಬಲು ಅಂತಿಮ ಆಯ್ಕೆ ಪಟ್ಟಿಯನ್ನು ದಿನಾಂಕ:16/05/2013 ರಂದು ಪ್ರಕಟಿಸಲಾಗಿತ್ತು. ಇದರಲ್ಲಿ ಶ್ರೀ.ಶಂಕರ್ ತಂದೆ ಪಿಟ್ಟೆ ಮರಿಯಪ್ಪ, ನಂ.168, 2ನೇ ಮುಖ್ಯ ರಸ್ತೆ, ಕಮಲಾನಗರ, ಬೆಂಗಳೂರು-560079ರವರ ಶೇಕಡವಾರು ಅಂಕಗಳಿಗಿಂತ ಶ್ರೀ.ಜೈವಂತ್ ತಂದೆ ತಿಪ್ಪಣ್ಣ, ಊಡಬಾಳ ಅಂಚೆ, ಹುಮನಾಬಾದ ತಾಲ್ಲೂಕು, ಜಿಲ್ಲೆ-ಬೀದರ್-585412 ರವರ ಶೇಕಡವಾರು ಅಂಕಗಳು ಹೆಚ್ಚಿಗೆ ಇರುವುದರಿಂದ ನಿಯಮಾನುಸಾರ ಶ್ರೀ.ಶಂಕರ್‌ರವರ ಹೆಸರನ್ನು ಕೈಬಿಟ್ಟು ಶ್ರೀ.ಜೈವಂತ್‌ರವರನ್ನು ಆಯ್ಕೆಗೆ ಪರಿಗಣಿಸಿ. ಆದೇಶ ಹೊರಡಿಸಿದೆ. ಉಳಿದಂತೆ ಯಾವುದೇ ತಿದ್ದುಪಡಿ ಇರುವುದಿಲ್ಲ.

**ಆಯುಕ್ತರು**

**ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಬೆಂಗಳೂರು.**

**PD. 68**
**SC. 05**

**ಕರ್ನಾಟಕ ಲೋಕಸೇವಾ ಆಯೋಗ, "ಉದ್ಯೋಗ ಸೌಧ" ಬೆಂಗಳೂರು-560001.**

**ಅಧಿಸೂಚನೆ**

**ಸಂಖ್ಯೆ ಆರ್(2)179/2014-15/ಪಿಎಸ್‌ಸಿ ದಿನಾಂಕ: 11-11-2014.**

ಆಯೋಗದ ಅಧಿಸೂಚನೆ ಸಂಖ್ಯೆ ಆರ್(2)310/2012-13/ಪಿಎಸ್‌ಸಿ, ದಿನಾಂಕ: 09-01-2013ರಲ್ಲಿ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯಲ್ಲಿನ ವಿವಿಧ ವೃತ್ತಿಯಲ್ಲಿ 54 ಹುದ್ದೆಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳೂ 2006ರನ್ವಯ ನೇಮಕಾತಿ ಮಾಡಲು ಅಧಿಸೂಚಿಸಿ ಅರ್ಜಿಗಳನ್ನು ಸ್ವೀಕರಿಸಲು ದಿನಾಂಕ: 14-02-2013 ರಂದು ಕೊನೆಯ ದಿನಾಂಕವೆಂದು ನಿಗದಿಪಡಿಸಲಾಗಿತ್ತು.

ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ, ಇವರು ದಿನಾಂಕ: 26-09-2014ರ ಪತ್ರದಲ್ಲಿ ಅನುಚ್ಛೇಧ 371(ಜೆ)ಗೆ ಸಂಬಂಧಿಸಿದಂತೆ ಹೈದರಾಬಾದ್-ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಾತಿಯನ್ನು ಕಲ್ಪಿಸಬೇಕಿದ್ದು, ಈಗಾಗಲೇ ಅಧಿಸೂಚಿಸಿರುವ ವಿವಿಧ ವೃತ್ತಿಯ 46 ಹುದ್ದೆಗಳಿಗೆ ಅನ್ವಯವಾಗುವುದರಿಂದ, ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವ ಸಲುವಾಗಿ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯಲ್ಲಿನ ವಿವಿಧ ವೃತ್ತಿಯಲ್ಲಿ 46 ಹುದ್ದೆಗಳನ್ನು ಹಿಂದಕ್ಕೆ ಪಡೆಯುವಂತೆ ಕೋರಿರುತ್ತಾರೆ. ಇವರ ಕೋರಿಕೆಯಂತೆ ದಿನಾಂಕ: 24-01-2013ರ ಕರ್ನಾಟಕ ರಾಜ್ಯ ಪತ್ರದ ಭಾಗ-5ರಲ್ಲಿ ಪ್ರಕಟವಾದ ಆಯೋಗದ ದಿನಾಂಕ: 09-01-2013ರಂದು ಹೊರಡಿಸಿರುವ ಅಧಿಸೂಚನೆಯಲ್ಲಿ ಅನುಕ್ರಮ ಸಂಖ್ಯೆ 101-110, 111-123, 124-133, 134-146ರಲ್ಲಿ ಪ್ರಕಟಿಸಲಾದ ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆಯಲ್ಲಿನ ವಿವಿಧ ವೃತ್ತಿಯಲ್ಲಿ 46 ಹುದ್ದೆಗಳನ್ನು ಹಿಂಪಡೆಯಲಾಗಿದೆ.

**ಮನೋಜ್‌ಕುಮಾರ್‌ಮೀನಾ (ಭಾ.ಆ.ಸೇ.),**

ಕಾರ್ಯದರ್ಶಿ

ಕರ್ನಾಟಕ ಲೋಕಸೇವಾ ಆಯೋಗ

**PR. 25**
**SC. 30**

## IN THE COURT OF IV ADDL. CITY CIVIL JUDGE, MAYO HALL, BANGALORE CCH-21

**P& S.C. NO.25031/2014, HG: 17/3/2015**

**PETITIONER: -** **MR. GHULAM AHMED SAIT,** Aged 71 years, Son of the late S. Mohammed Ebrahim Sait, No.8, Dewan Surappa Lane, Chickpet Cross, Bangalore-560 053

**Versus-**

**RESPONDENTS:-**

1. **MR. NAZIR AHMED,** aged 74 years, son of late S. Mohammed Ebrahim Sait, No.8 Dewan Surappa Lane, Chickpet Cross, Bangalore-560 053
2. **MR. MOHAMMED SAIT,** aged 75 Years, son of late Jan Mohammed Sait, Flat No.7, First Floor, Dukes Mansion, No.100, Spencer Road, Cleveland Town, Bangalore-560 005.
3. **MR. MOHAMMED FAISAL**, aged 45 years, son of Mohammed Sait, Flat No. 7 First Floor, Dukes Mansion, No.100, Spencer Road, Cleveland Town, Bangalore-560 005.
4. **MRS. SHABANA SAIT**, aged 42 years, daughter of Mohammed Sait and wife of Fakir Mohammed Sait, Flat No.7, First Floor, Dukes Mansion, No.100, Spencer Road, Cleveland Town, Bangalore-560 005.
5. **MRS. NASIMA NOOR MOHAMMED,** aged 66 years, wife of Noor Mohammed Sait, Flat No. 204, Athens II, Prestige Acropolis, (Next to Forum Mall), Hosur Road, Bangalore-560 029.
6. **MR. MOHAMMED SIDDICK,** aged 64 years, son of late S. Mohammed Ebrahim Sait, presently care of N.E.Doctor & Co., No. 8, Dewan Surappa Lane, Chickpet Cross, Bangalore-560 053
7. **MR. ABDUL KHADER,** aged 62 years, son of late S. Mohammed Ebrahim Sait, presently care of N.E. Doctor & Co., No.8, Dewan Surappa Lane, Chickpet Cross, Bangalore-560 053.
8. **MR. ABDUL SATTAR**, aged 60 years, son of late S. Mohammed Ebrahim Sait, presently care of N.E.Doctor & Co., No.8, Dewan Surappa Lane, Chickpet Cross, Bangalore-560 053.
9. **MRS.ZARINA EBRAHIM,** aged 57 years, wife of Ebrahim Hussain, No.17, HAL IIIrd Stage, Ist Main, Thippasandra (Opposite 515 Colony), Indiranagar, Bangalore-560 075

**PUBLIC NOTICE**

Notice is hereby given that a petition has been made to this Court under part X, Section 372 of the Indian Succession Act, 1925, for grant of a SUCCESSSION CERTIFICATE to claim, collect and dispose of the Schedule mentioned financial securities and movable assets of the deceased S. Mohammed Ebrahim Sait.

Be it known that No Caveat has been entered and the said petition is posted for hearing on 17/03/2015 at 11 O'Clock. Any person/s claiming to have any interest may come and participate in the proceedings before grant of Succession Certificate.

**SCHEDULE**

**Part A:**

Share Account Number: 19/08439, Total Number of Shares-38,400, Share Value as on 14/8/2014 on BSE- Rs. 358.65, Total Value of Share-Rs. 1,37,72160

**Part B:**

Savings Bank Account in Syndicate Bank, Fraser Town Branch;

Given under my hand and seal of the Court, this the 23rd day of Jan., 2015.

By Order of the Court
Sheristedar
City Civil & Sessions Court Mayo
Hall Unit Bangalore.

**PD. 71**
**SC. 05**

## PUBLIC NOTICE

## IN THE COURT OF THE CITY CIVIL JUDGE

## Mayo Hall, Bangalore HG: 19/02/2015

## P & SC 25005/14

1. Nagamma @ Nagaveni, W/o. Late Suryakantha Rao, Aged about 36 years,
2. Ms. Subhadra D/o. Late Suryakantha Rao,

   Aged about 17 years, Minor represented by her

   Natural guardian and mother Smt. Nagamma @ Nagaveni,

   Both residing at No. 1046, 13th Main, 5th Cross, BTM I Stage, Bangalore-560 029----------Petitioners

Vs

NIL ------------Respondent

Notice is hereby given that a petition has been made to this court under section 276 of the Indian Succession Act, for grant of Letters of Administration consisting of immovable property at No. 1046, 13th Main, 5th Cross, BTM I Stage, Bangalore-560- 029, of the deceased late Anna Rao, who died intestate on 4-5-2007.

Be it known that no caveat has been entered and the said petition is posted for hearing on 19.02.2015 at 11.00 a.m All persons claiming to have any interest in the assets of the deceased may come and see the proceedings before grant of Letters of Administration.

Given under my hand seal of the court, this the 21/01/2015.

By Order of the Court
Sheristedar
City Civil & Sessions Court Mayo
Hall Unit Bangalore.

**PD. 72**
**SC. 05**

## FORM-I

## (SEE RULE-9)

## DEPARTMENT OF POLICE

### OFFICE OF THE SUPERINTENDENT OF POLICE BELGAVI

### NOTIFICATION

**Sri. Veerabhadrayya. Gadagayya. Chikkayyanavar** CPC-1257 Working civil constable Department of /Office of the Belgavi District now on deputation basis O/o Supdt. Of police Directorate of civil Rights Enforcement. Belgavi Region, Belgavi is permitted to change his name to **Veerabhadrayya. Gadagayya. Chikkamath**. CPC-1257.

**Superintendent Of Police Belgavi**.

**PD. C/n. 125**
**SC. 10**

## FORM-I

## (SEE RULE-9)

## DEPARTMENT OF POLICE

### SIRSI RURAL POLICE STATION

### SUPERINTENDENT OF POLICE DEPARTMENT OF POLICE UTTAR KANNADA, KARWAR.

### NOTIFICATION

Sri. **Basavaraj S/o. Narayan vaddar** working as Civil Police Head Constable in the Sirsi Rural Police Station, Department of Police, Office of Uttar Kannada, Sirsi Rural Police Station is permitted to change his Name to **Basavaraj S/o. Narayan Malagankoppa**.

**Signature & Designation of the**
**Appointing Authority.**.

**PD. C/n. 126**
**SC. 10**

## FORM-IV

## (SEE RULE-12)

### NOTICE

It is hereby notified that the undersigned has changed his/her name from **MUSHEPPA MAREPPA PADEWAR** TO **MAHANTESH MAREPPA PADEWAR**

**MUSHEPPA MAREPPA PADEWAR**

**PD. C/n. 127**
**SC. 10**

## FORM-IV

## (SEE RULE-12)

### NOTICE

It is hereby notified that the undersigned has changed his/her name from **CHANDRAPPA S/O FAKKIRAPPA OLEKAR** TO **CHANDRAPPA S/O FAKKIRAPPA KALER.**

**CHANDRAPPA S/O FAKKIRAPPA OLEKAR**

**PD. C/n. 128**
**SC. 10**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಕರ್ನಾಟಕ ಲೋಕ ಸೇವಾ ಆಯೋಗ, " ಉದ್ಯೋಗ ಸೌಧ ", ಬೆಂಗಳೂರು–560001**

**ಸಂಖ್ಯೆ: ಪಿಎಸ್‌ಸಿ 1 ಆರ್‌ಟಿ(4)ಬಿ/2014, ದಿನಾಂಕ 06–12–2014**

**ಸೇರ್ಪಡೆ ಅಧಿಸೂಚನೆ**

ಆಯೋಗದ ಅಧಿಸೂಚನೆ ಸಂಖ್ಯೆ ಪಿಎಸ್‌ಸಿ 1 ಆರ್‌ಟಿ(4)ಬಿ/2014 ದಿನಾಂಕ 25–09–2014ರಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯದ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಲ್ಲಿ ವಿವಿಧ ವಿಷಯಗಳಲ್ಲಿ ಬೋಧಕ / ಬೋಧಕೇತರ ಹುದ್ದೆಗಳಿಗೆ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. **ಇಲಾಖೆಯ ಪತ್ರ ಸಂಖ್ಯೆ ಅಸಂನಿ/ ಕೆ.ಪಿ.ಎಸ್.ಸಿ./ನೇಮಕಾತಿ/ಸಿಆರ್–63/2014–15 ದಿನಾಂಕ 22–11–2014** ರಲ್ಲಿ ಕೆಲವು ವಿಷಯಗಳಿಗೆ ಇನ್ನೂ ಹೆಚ್ಚಿನ ಹುದ್ದೆಗಳ ನೇಮಕಾತಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದರಿಂದ ಇವರ ಪ್ರಸ್ತಾವನೆಯಂತೆ ದಿನಾಂಕ 09–10–2014 ರ ರಾಜ್ಯಪತ್ರದ ಭಾಗ–5ರಲ್ಲಿನ ಪ್ರಕಟವಾದ ಅಧಿಸೂಚನೆಯಲ್ಲಿ ಹುದ್ದೆಗಳನ್ನು ಹೆಚ್ಚಿಸಿ ಸೇರ್ಪಡೆ ಅಧಿಸೂಚನೆಯನ್ನು ಹೊರಡಿಸಲಾಗಿದೆ.

ರಾಜ್ಯಪತ್ರದ ಅನುಸೂಚಿಯ ಹುದ್ದೆಯ ಸಂಕೇತ 02 ಹಾಗೂ 07 ರಿಂದ 18 ರವರೆಗೆ ಅಧಿಸೂಚಿಸಲಾದ ಹುದ್ದೆಗಳ ಜೊತೆಗೆ ಇನ್ನೂ 03 ಹುದ್ದೆಗಳು ಸೇರಿಸಲಾಗಿದ್ದು ಹೆಚ್ಚಿಸಲಾದ ಹುದ್ದೆಗಳ ವರ್ಗೀಕರಣವನ್ನು ಕೆಳಗಿನಂತೆ ಓದಿಕೊಳ್ಳುವುದು:–

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ರಾಜ್ಯ ವೃಂದದ ಹುದ್ದೆಗಳು | ಹೈದ್ರಾಬಾದ್ ಕರ್ನಾಟಕ ವೃಂದದ ಹುದ್ದೆಗಳು |
|---|---|---|---|
| 1 | ಪ್ರಾಂಶುಪಾಲರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 2 | ಕನ್ನಡ ಭಾಷಾ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 3 | ಆಂಗ್ಲ ಭಾಷಾ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 4 | ಹಿಂದಿ ಭಾಷಾ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 5 | ಉರ್ದು ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 6 | ಗಣಿತ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 7 | ಸಾಮಾನ್ಯ ವಿಜ್ಞಾನ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 8 | ಸಮಾಜ ವಿಜ್ಞಾನ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 9 | ದೈಹಿಕ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 10 | ಗಣಕ ಯಂತ್ರ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 11 | ಆರ್ಟ್ ಅಂಡ್ ಕ್ರಾಫ್ಟ್ ಶಿಕ್ಷಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 12 | ಪ್ರಥಮ ದರ್ಜೆ ಗಣಕ ಯಂತ್ರ ಸಹಾಯಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |
| 13 | ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿಲಯಪಾಲಕರು | 02 ಹುದ್ದೆಗಳು<br>ಪ.ಜಾ(ಇ)–01 ಸಾ.ಅ.(ಮಾಸೈ)–01 | 01 ಹುದ್ದೆ<br>ಸಾ.ಅ(ಗ್ರಾ)–01 |

ಈ ಮೇಲ್ಕಂಡ ಹುದ್ದೆಗಳ ಸಂಖ್ಯೆಯಲ್ಲಿ ಮತ್ತು ವರ್ಗೀಕರಣದಲ್ಲಿ ಮಾತ್ರ ಬದಲಾವಣೆಯಾಗಿದ್ದು, ಉಳಿದಂತೆ ಹುದ್ದೆಗಳಿಗೆ ನಿಗದಿಪಡಿಸಿದ ವಿದ್ಯಾರ್ಹತೆ, ವೇತನ ಶ್ರೇಣಿ ಮತ್ತು ವಯೋಮಿತಿಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ದಿನಾಂಕ 25–09–2014ರ ಅಧಿಸೂಚನೆಯಲ್ಲಿರುವ ಷರತ್ತುಗಳು ಯಥಾವತ್ತಾಗಿ ಮುಂದುವರೆಯುತ್ತವೆ.

**ಮನೋಜ್ ಕುಮಾರ್ ಮೀನಾ (ಭಾ.ಆ.ಸೇ).,**
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ. ಬೆಂಗಳೂರು.

**PR. 28**
**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59